

**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 330
ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 18-02-2022
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 2020-21 ಮತ್ತು 2021-22ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ಎಲ್ಲಾ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ ಶುಲ್ಕಗಳನ್ನು ಸಮರ್ಪಕವಾಗಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಅನುಷ್ಠಾನಗೊಳಸಲಾಗುತ್ತಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಕಾರ್ಯಕ್ರಮವನ್ನು ಇ-ಆಡಳಿತ ಇಲಾಖೆಯ ವತಿಯಿಂದ ಅಭಿವೃದ್ಧಿ ಪಡಿಸಿ ನಿರ್ವಹಣೆ ಮಾಡಲಾಗುತ್ತಿರುವ **ರಾಜ್ಯ ವಿದ್ಯಾರ್ಥಿವೇತನ ಪೋರ್ಟಲ್ (SSP)** ತಂತ್ರಾಂಶದ ಮೂಲಕ ಸಮರ್ಪಕವಾಗಿ ಅನುಷ್ಠಾನ ಮಾಡಲಾಗುತ್ತಿದೆ. ಮಂಜೂರಾದ ವಿದ್ಯಾರ್ಥಿವೇತನ ಮೊತ್ತವನ್ನು ಡಿ.ಬಿ.ಟಿ. ಪೋರ್ಟಲ್ ಮೂಲಕ ವಿದ್ಯಾರ್ಥಿಗಳ ಆಧಾರ್ ಜೋಡಿತ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗುತ್ತಿದೆ.<br><br>**ವಿದ್ಯಾರ್ಥಿವೇತನ ಮಂಜೂರಾತಿ ಪ್ರಕ್ರಿಯೆ ಈ ಕೆಳಕಂಡ ಕಾರಣಗಳಿಂದ ವಿಳಂಬವಾಗಿರುತ್ತದೆ.**<br>• ವಿದ್ಯಾರ್ಥಿಗಳ ಆಧಾರ್ ಸಂಖ್ಯೆಗೆ ಬ್ಯಾಂಕ್ ಖಾತೆ ಜೋಡಣೆಯಾಗದೇ ಇರುವುದು.<br>• ವಿದ್ಯಾರ್ಥಿಯ ಶೈಕ್ಷಣಿಕ ದಾಖಲಾತಿಯಾದ Bonafide Details ಗಳು ಸಂಬಂಧಪಟ್ಟ ವಿಶ್ವವಿದ್ಯಾಲಯ/ಇಲಾಖೆಗಳಿಂದ ಸ್ವೀಕೃತವಾಗದೇ ಇರುವುದು.<br>• ಕೋರ್ಸುವಾರು ನಿಗದಿಪಡಿಸಿದ ಶುಲ್ಕಗಳ ವಿವರಗಳನ್ನು ಸಂಬಂಧಪಟ್ಟ ಇಲಾಖೆ/ವಿಶ್ವವಿದ್ಯಾಲಯಗಳ ತಂತ್ರಾಂಶದಲ್ಲಿ Update ಮಾಡದೇ ಇರುವುದು.<br><br>ಮುಂದುವರೆದು, ಎಲ್ಲಾ ಅರ್ಹ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ ಶುಲ್ಕಗಳನ್ನು ಸಮರ್ಪಕವಾಗಿ ಮಂಜೂರು ಮಾಡಲಾಗುತ್ತಿದೆ.<br>2020-21ನೇ ಸಾಲಿನಲ್ಲಿ ಒಟ್ಟು 3,20,993 ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ್ದು, Bonafide Details ಗಳು ಸ್ವೀಕೃತವಾಗಿರುವ ಒಟ್ಟು 3,17,737 ವಿದ್ಯಾರ್ಥಿಗಳ ಪೈಕಿ, ಒಟ್ಟು 2,96,733 ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ರೂ.382.25 ಕೋಟಿಗಳ ವಿದ್ಯಾರ್ಥಿವೇತನ ಮಂಜೂರು ಮಾಡಲಾಗಿದೆ.<br>2021-22ನೇ ಸಾಲಿನಲ್ಲಿ ಇದುವರೆವಿಗೂ ಒಟ್ಟು 3,07,791 ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ್ದು, Bonafide Details ಗಳು ಸ್ವೀಕೃತವಾಗಿರುವ ಒಟ್ಟು 2,22,233 ವಿದ್ಯಾರ್ಥಿಗಳ ಪೈಕಿ, ಒಟ್ಟು 73,037 ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ರೂ. 11.84 ಕೋಟಿಗಳ ವಿದ್ಯಾರ್ಥಿವೇತನ ಮಂಜೂರು ಮಾಡಲಾಗಿದೆ. |

ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ 2020-21 ಮತ್ತು 2021-22ನೇ ಸಾಲಿನಲ್ಲಿ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರಧ ವಿದ್ಯಾರ್ಥಿವೇತನಕ್ಕಾಗಿ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಿದ ಅರ್ಹ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಲಾಗಿರುತ್ತದೆ. ವಿವರ ಈ ಕೆಳಕಂಡಂತಿದೆ.

| ವರ್ಷ | ಆನ್‌ಲೈನ್‌ನಲ್ಲಿ ಸ್ವೀಕೃತವಾದ ಅರ್ಜಿಗಳ ಸಂಖ್ಯೆ | ವಿದ್ಯಾರ್ಥಿವೇತನ ಪಾವತಿಸಲಾದ ಅರ್ಜಿಗಳ ಸಂಖ್ಯೆ | ಪಾವತಿಸಿದ ಮೊತ್ತ (ಲಕ್ಷಗಳಲ್ಲಿ) |
|---|---|---|---|
| ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ | | | |
| 2020-21 | 4,15,956 | 3,93,407 | 5941.00 |
| 2021-22 | 4,21,851 | 2,43,736 | 2849.00 |
| ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ | | | |
| 2020-21 | 1,15,693 | 1,05,083 | 10616.21 |
| 2021-22 | 1,07,718 | 20,715 | 860.47 |

- 2020-21ನೇ ಸಾಲಿಗೆ ಆದಾರ್ ಜೋಡಣೆಯಾಗದಿರುವ ಹಾಗೂ Name mismatch, ಇರುವ ಅರ್ಜಿಗಳು ವಿದ್ಯಾರ್ಥಿವೇತನ ಪಾವತಿಗೆ ಬಾಕಿ ಇರುತ್ತವೆ. ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ಆಧಾರ್ ಸಂಖ್ಯೆಯನ್ನು ಜೋಡಣೆ ಮಾಡಿ ವಿದ್ಯಾರ್ಥಿವೇತನ ಮಂಜೂರು ಮಾಡಲು ಕ್ರಮವಹಿಸುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ ಮುಖ್ಯ ಕಾರ್ಯನಿರ್ವಾಹಕಾಧಿಕಾರಿಗಳು, ಜಿಲ್ಲಾ ಪಂಚಾಯತ್ ರವರ ಅಧ್ಯಕ್ಷತೆಯಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಾಹಕಾಧಿಕಾರಿಗಳು, ತಾಲ್ಲೂಕು ಪಂಚಾಯತ್ ರವರ ಅಧ್ಯಕ್ಷತೆಯಲ್ಲಿ ಪರಿಶೀಲನಾ ಸಮಿತಿಯನ್ನು ರಚಿಸಲಾಗಿರುತ್ತದೆ. ಆಧಾರ್ ಜೋಡಣೆಯಾದ ಎಲ್ಲಾ ಅರ್ಹ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಪಾವತಿಸಲಾಗಿದೆ.

2021-22ನೇ ಸಾಲಿಗೆ ವಿದ್ಯಾರ್ಥಿವೇತನ ಪಾವತಿಸಲು ರಾಜ್ಯ ವಿದ್ಯಾರ್ಥಿವೇತನ ತಂತ್ರಾಂಶದಲ್ಲಿ ಪಿ.ಯು.ಸಿ ವಿದ್ಯಾರ್ಥಿಗಳಿಗೆ ಮಾತ್ರ ವಿದ್ಯಾರ್ಥಿವೇತನ ಮಂಜೂರು ಮಾಡಲು ಅವಕಾಶ ಕಲ್ಪಿಸಿರುವುದರಿಂದ ಆದಾರ್ ಲಿಂಕ್ ಆಗಿರುವ ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ DBT ಮೂಲಕ ಪಾವತಿಸಲಾಗುತ್ತಿದೆ, 2021-22ನೇ ಸಾಲಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನಕ್ಕಾಗಿ ಅರ್ಜಿ ಸಲ್ಲಿಸಿದ ವಿದ್ಯಾರ್ಥಿಗಳ ದತ್ತಾಂಶ, ದಾಖಲಾತಿ ವಿವರ, ಕೌನ್ಸಲಿಂಗ್ ವಿವರ ಹಾಗೂ ಶುಲ್ಕದ ವಿವರಗಳನ್ನು ಕಾಲೇಜು/ವಿಶ್ವವಿದ್ಯಾಲಯಗಳು ಸರಿಯಾದ ಸಮಯಕ್ಕೆ ಎಸ್.ಎಸ್.ಪಿ ಪೋರ್ಟಲ್‌ನಲ್ಲಿ ಮಾಹಿತಿಯನ್ನು Update ಮಾಡದೇ ಇರುವುದರಿಂದ ಇ-ಆಡಳಿತ ಇಲಾಖೆಯು SSP ತಂತ್ರಾಂಶದಲ್ಲಿ ವಿದ್ಯಾರ್ಥಿವೇತನ ಪಾವತಿಸಲು ಅವಕಾಶ ಕಲ್ಪಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಇ-ಆಡಳಿತ ಇಲಾಖೆಯು SSP ತಂತ್ರಾಂಶದಲ್ಲಿ ವಿದ್ಯಾರ್ಥಿವೇತನ ಪಾವತಿಸಲು ಅವಕಾಶ ಕಲ್ಪಿಸಿದ ನಂತರ ಅರ್ಹ ವಿದ್ಯಾರ್ಥಿಗಳ ಆಧಾರ್ ಲಿಂಕ್ ಬ್ಯಾಂಕ್ ಖಾತೆಗೆ DBT ಮೂಲಕ ಪಾವತಿಸಲಾಗುವುದು.

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ 2020-21ನೇ ಸಾಲಿನಲ್ಲಿ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಕಾರ್ಯಕ್ರಮಗಳಡಿ ಕೋವಿಡ್-19 ಹಿನ್ನಲೆಯಲ್ಲಿ ಸರ್ಕಾರದ ಆದೇಶದಂತೆ ಶುಲ್ಕ ವಿನಾಯಿತಿ ಯೋಜನೆಯನ್ನು ಮಾತ್ರ ಅನುಷ್ಠಾನಗೊಳಿಸಲಾಗಿರುತ್ತದೆ. ಸದರಿ ಸಾಲಿನಲ್ಲಿ ಅರ್ಹರಿರುವ 7,62,517 ವಿದ್ಯಾರ್ಥಿಗಳಿಗೆ ಶುಲ್ಕ ಮರು ಪಾವತಿ ಯೋಜನೆಯಡಿ ವಿದ್ಯಾರ್ಥಿ ವೇತನ ಮಂಜೂರು ಮಾಡಲಾಗಿದ್ದು, ಉಳಿದ ವಿದ್ಯಾರ್ಥಿಗಳಿಗೆ ಮಂಜೂರಾತಿ

ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.

2021-22ನೇ ಸಾಲಿನಲ್ಲಿ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಕಾರ್ಯಕ್ರಮಗಳಡಿ ವಿದ್ಯಾರ್ಥಿ ವೇತನಕ್ಕೆ ಆನ್ಲೈನ್ ಅರ್ಜಿ ಆಹ್ವಾನಿಸಲಾಗಿದ್ದು, ಕೋವಿಡ್-19 ಕಾರಣದಿಂದ ಪದವಿ ಮತ್ತು ವೃತ್ತಿಪರ ಕಾಲೇಜುಗಳು ತಡವಾಗಿ ಪ್ರಾರಂಭವಾಗಿರುವುದರಿಂದ ಅರ್ಜಿ ಸಲ್ಲಿಸಲು ದಿನಾಂಕ:28.02.2022 ರವರೆಗೆ ಅವಕಾಶವನ್ನು ಕಲ್ಪಿಸಲಾಗಿದ್ದು, ವಿದ್ಯಾರ್ಥಿ ವೇತನ ಮಂಜೂರು ಮಾಡಲು ಕ್ರಮ ವಹಿಸಲಾಗುವುದು.

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವತಿಯಿಂದ ಸದರಿ ಇಲಾಖೆಯ ವ್ಯಾಪ್ತಿಯ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ ರಾಜ್ಯದಲ್ಲಿ 2020-21 ನೇ ಸಾಲಿನಲ್ಲಿ ಅರ್ಜಿ ಸಲ್ಲಿಸಿದ ಎಲ್ಲ ಅರ್ಹ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ಸಮರ್ಪಕವಾಗಿ ನಿಯಮಾನುಸಾರ ವಿತರಿಸಲಾಗಿದೆ. ಶುಲ್ಕ ಮರುಪಾವತಿ ಪ್ರಕ್ರಿಯೆಯು ಚಾಲ್ತಿಯಲ್ಲಿದ್ದು ಈ ತಿಂಗಳಲ್ಲಿ ಅರ್ಹ ವಿದ್ಯಾರ್ಥಿಗಳಿಗೆ ವಿತರಿಸಲಾಗುತ್ತದೆ.

2021-22 ನೇ ಸಾಲಿನಲ್ಲಿ ಅರ್ಜಿ ಸಲ್ಲಿಸಿದ ವಿದ್ಯಾರ್ಥಿಗಳಿಗೆ ಭಾರತ ಸರ್ಕಾರದಿಂದ (NSP) ವಿದ್ಯಾರ್ಥಿ ವೇತನ ವಿತರಣೆ ಪ್ರಕ್ರಿಯೆಯು ಚಾಲ್ತಿಯಲ್ಲಿದ್ದು, ಕರ್ನಾಟಕ ಸರ್ಕಾರದ ವಿದ್ಯಾರ್ಥಿ ವೇತನಕ್ಕೆ (SSP) ಅರ್ಜಿ ಸಲ್ಲಿಸುವ ಪ್ರಕ್ರಿಯೆಯು ಪ್ರಗತಿಯಲ್ಲಿದೆ.

**ಅಲ್ಪಸಂಖ್ಯಾತ ಕಲ್ಯಾಣ ಇಲಾಖೆ ವತಿಯಿಂದ ವಿದ್ಯಾರ್ಥಿ ವೇತನ ವಿತರಣೆಯಾದ ವಿವರ**

| ಕ್ರ.ಸಂ | ವರ್ಷ | ವಿದ್ಯಾರ್ಥಿ ವೇತನ | | ಷರಾ |
|---|---|---|---|---|
| | | ವಿದ್ಯಾರ್ಥಿಗಳ ಸಂಖ್ಯೆ | ಮೊತ್ತ | |
| 1 | 2020-21 2021-22ನೇ ಸಾಲಿನ ಅನುದಾನದಲ್ಲಿ ವಿತರಿಸಲಾಗುತ್ತಿದೆ | 112147 | ರೂ. 67,03,67,298 | ಶುಲ್ಕ ಮರುಪಾವತಿಯು ಪ್ರಗತಿಯಲ್ಲಿದೆ |
| 2 | 2021-22 | 2021-22ನೇ ಸಾಲಿಗೆ ಅರ್ಜಿ ಸಲ್ಲಿಸಿರುವ ಪ್ರಕ್ರಿಯೆಯು ಚಾಲ್ತಿಯಲ್ಲಿರುತ್ತದೆ. | | |

ಆ) ಹಿಂದುಳಿದ ವರ್ಗಗಳಡಿ ಬರುವ ಪ್ರವರ್ಗ–1ರ ಎಷ್ಟು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮತ್ತು ಶುಲ್ಕ ನೀಡಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು)

2020-21ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳಡಿ ಬರುವ ಪ್ರವರ್ಗ-1 ರ 92,078 ವಿದ್ಯಾರ್ಥಿಗಳಿಗೆ ಶುಲ್ಕ ಮರು ಪಾವತಿ ಮಂಜೂರು ಮಾಡಲಾಗಿದ್ದು, ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ

ಇ) ಪ್ರವರ್ಗ–1ರ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸೌಲಭ್ಯಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳಿಗೆ ಸಮನಾಂತರವಾಗಿ ನೀಡಲಾಗುತ್ತಿದೆಯೇ; ಇಲ್ಲದಿದ್ದಲ್ಲಿ ಕಾರಣವೇನು?

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಮೆಟ್ರಿಕ್ ನಂತರದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ, ಶುಲ್ಕ ವಿನಾಯಿತಿ ಮತ್ತು ವಿದ್ಯಾಸಿರಿ (ಊಟ ಮತ್ತು ವಸತಿ ಸಹಾಯ ಯೋಜನೆ) ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

- ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಕಾರ್ಯಕ್ರಮದಡಿಯಲ್ಲಿ ವಿದ್ಯಾರ್ಥಿ ವೇತನ ಮಂಜೂರು ಮಾಡಲು ಪ್ರವರ್ಗ-2ಎ, 3ಎ, 3ಬಿ ಮತ್ತು ಇತರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷಗಳ ಆದಾಯ ಮಿತಿಯನ್ನು ಹಾಗೂ **ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ಹೆಚ್ಚಿನ ಸೌಲಭ್ಯ ಕಲ್ಪಿಸುವ ಸಲುವಾಗಿ ರೂ.2.5 ಲಕ್ಷದ ಆದಾಯ ಮಿತಿಯನ್ನು ನಿಗದಿಪಡಿಸಲಾಗಿದೆ.**

| | | |
|---|---|---|
| | | ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಕಾರ್ಯಕ್ರಮದಡಿಯಲ್ಲಿ ಈ ಕೆಳಕಂಡಂತೆ ಕೋರ್ಸ್ ಗ್ರೂಪ್ ವಾರು ವಿದ್ಯಾರ್ಥಿ ವೇತನ ಮಂಜೂರು ಮಾಡಲಾಗುತ್ತದೆ. |

| **ಕೋರ್ಸ್ ಗ್ರೂಪ್** | **ವಿದ್ಯಾರ್ಥಿ ವೇತನ (ರೂ.ಗಳಲ್ಲಿ)** |
|---|---|
| ಗ್ರೂಪ್-ಎ | 3500/- |
| ಗ್ರೂಪ್-ಬಿ | 3350/- |
| ಗ್ರೂಪ್-ಸಿ | 2100/- |
| ಗ್ರೂಪ್-ಡಿ | 1600/- |

- ಶುಲ್ಕ ಮರು ಪಾವತಿ ಯೋಜನೆಯಡಿಯಲ್ಲಿ ಶುಲ್ಕ ಮರು ಪಾವತಿ ಮಂಜೂರು ಮಾಡಲು ಪ್ರವರ್ಗ-2ಎ, 3ಎ, 3ಬಿ ಮತ್ತು ಇತರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷಗಳ ಆದಾಯ ಮಿತಿಯನ್ನು ಹಾಗೂ **ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ಹೆಚ್ಚಿನ ಸೌಲಭ್ಯ ಕಲ್ಪಿಸುವ ಸಲುವಾಗಿ ರೂ.2.5 ಲಕ್ಷದ ಆದಾಯ ಮಿತಿಯನ್ನು ನಿಗದಿಪಡಿಸಲಾಗಿದೆ.**

  ಶುಲ್ಕ ವಿನಾಯಿತಿ ಯೋಜನೆಯಡಿಯಲ್ಲಿ ವಿದ್ಯಾರ್ಥಿ ವೇತನ ಪಡೆಯಲು ಪ್ರವರ್ಗ-2ಎ, 3ಎ, 3ಬಿ ಮತ್ತು ಇತರೆ ಹಿಂದುಳಿದ ವರ್ಗಗಳ ಹೊಸ ವಿದ್ಯಾರ್ಥಿಗಳಿಗೆ ಶೇ.50% ಅಂಕಗಳನ್ನು ಹಾಗೂ ನವೀಕರಣ ವಿದ್ಯಾರ್ಥಿಗಳಿಗೆ ಶೇ.60% ಅಂಕಗಳನ್ನು ನಿಗದಿಪಡಿಲಾಗಿದ್ದು, **ಪ್ರವರ್ಗ-1ರ ಹೊಸ ವಿದ್ಯಾರ್ಥಿಗಳಿಗೆ ಶೇ.40% ಅಂಕಗಳನ್ನು ಹಾಗೂ ನವೀಕರಣ ವಿದ್ಯಾರ್ಥಿಗಳಿಗೆ ಶೇ.50% ಅಂಕಗಳನ್ನು ನಿಗದಿಪಡಿಲಾಗಿದೆ.**

  **ಶುಲ್ಕ ವಿನಾಯಿತಿ ಯೋಜನೆಯಡಿಯಲ್ಲಿ ಅರ್ಹರಿರುವ ಪ್ರವರ್ಗ-1ರ ಎಲ್ಲಾ ವಿದ್ಯಾರ್ಥಿಗಳಿಗೆ ಮೊದಲನೆಯ ಆದ್ಯತೆಯಲ್ಲಿ ಶುಲ್ಕ ಮರು ಪಾವತಿಯನ್ನು ಮಾಡಲಾಗುವುದು.**

  ಶುಲ್ಕ ವಿನಾಯಿತಿ ಯೋಜನೆಯಡಿಯಲ್ಲಿ ಈ ಕೆಳಕಂಡ 5 ಶುಲ್ಕಗಳನ್ನು ಮರುಪಾವತಿ ಮಾಡಲಾಗುತ್ತದೆ.

  1. ಬೋಧನಾಶುಲ್ಕ
  2. ಪ್ರಯೋಗಾಲಯ ಶುಲ್ಕ
  3. ಪರೀಕ್ಷಾ ಶುಲ್ಕ
  4. ಕ್ರೀಡಾ ಶುಲ್ಕ
  5. ಗ್ರಂಥಾಲಯ ಶುಲ್ಕ

ಈ 5 ಶುಲ್ಕಗಳ ಜೊತೆಗೆ ಶೇ.65% ಕ್ಕಿಂತ ಹೆಚ್ಚು ಅಂಕಗಳನ್ನು ಹೊಂದಿರುವ ಪ್ರವರ್ಗ-1ರ ಎಲ್ಲಾ ವಿದ್ಯಾರ್ಥಿಗಳಿಗೆ ಇತರೆ ಶುಲ್ಕಗಳನ್ನು ಮಂಜೂರು ಮಾಡಲಾಗುತ್ತದೆ.

- ವಿದ್ಯಾಸಿರಿ ಯೋಜನೆಯಡಿಯಲ್ಲಿ ಸೌಲಭ್ಯ ಪಡೆಯಲು ಪ್ರವರ್ಗ-2ಎ, 3ಎ, 3ಬಿ ಮತ್ತು ಇತರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷಗಳ ಆದಾಯ ಮಿತಿಯನ್ನು ಹಾಗೂ **ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ಹೆಚ್ಚಿನ ಸೌಲಭ್ಯ ಕಲ್ಪಿಸುವ ಸಲುವಾಗಿ ರೂ.2.5 ಲಕ್ಷದ ಆದಾಯ ಮಿತಿಯನ್ನು ನಿಗದಿಪಡಿಸಲಾಗಿದೆ.**

  ವಿದ್ಯಾ ಸಿರಿ ಯೋಜನೆಯಡಿಯಲ್ಲಿ ಅರ್ಹರಿರುವ ವಿದ್ಯಾರ್ಥಿಗಳಿಗೆ ಪ್ರತಿ ತಿಂಗಳಿಗೆ ರೂ.1500/- ರಂತೆ, ಶೈಕ್ಷಣಿಕ ಅವಧಿಯ 10 ತಿಂಗಳಿಗೆ ಒಟ್ಟು ರೂ.15000/- ಸಹಾಯ ಧನವನ್ನು ಮಂಜೂರು ಮಾಡಲಾಗುತ್ತದೆ.

ಸಕಇ 130 ಪಕವಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 330 ಕ್ಕೆ ಅನುಬಂಧ**

**2020-21ನೇ ಸಾಲಿನ ಶುಲ್ಕ ವಿನಾಯಿತಿ ಯೋಜನೆಯಡಿಯಲ್ಲಿ ಶುಲ್ಕ ಮರುಪಾವತಿಯನ್ನು ಪಡೆದ ಪ್ರವರ್ಗ-1 ರ ವಿದ್ಯಾರ್ಥಿಗಳ ಜಿಲ್ಲಾವಾರು ವಿವರ**

| ಕ್ರಮ.ಸಂ | ಜಿಲ್ಲೆ | 2020-21 ನೇ ಸಾಲಿನ ಪ್ರವರ್ಗ-1 ರ ಶುಲ್ಕ ವಿನಾಯಿತಿ ಮಂಜೂರಾದ ವಿದ್ಯಾರ್ಥಿಗಳ ಸಂಖ್ಯೆ |
|---|---|---|
| 1 | ಬಾಗಲಕೋಟೆ | 3023 |
| 2 | ಬೆಂಗಳೂರು ನಗರ | 6439 |
| 3 | ಬೆಂಗಳೂರು (ಗ್ರಾ) | 958 |
| 4 | ಬೆಳಗಾಂ | 8127 |
| 5 | ಬಳ್ಳಾರಿ | 4774 |
| 6 | ಬೀದರ್ | 872 |
| 7 | ಬಿಜಾಪುರ | 4074 |
| 8 | ಚಾಮರಾಜನಗರ | 2249 |
| 9 | ಚಿಕ್ಕಮಗಳೂರು | 1442 |
| 10 | ಚಿತ್ರದುರ್ಗ | 5344 |
| 11 | ದಕ್ಷಿಣ ಕನ್ನಡ | 1761 |
| 12 | ದಾವಣಗೆರೆ | 2788 |
| 13 | ಧಾರವಾಡ | 2504 |
| 14 | ಗದಗ | 951 |
| 15 | ಗುಲ್ಬರ್ಗಾ | 5806 |
| 16 | ಹಾಸನ | 1717 |
| 17 | ಹಾವೇರಿ | 2254 |
| 18 | ಕೊಡಗು | 172 |
| 19 | ಕೋಲಾರ | 924 |
| 20 | ಕೊಪ್ಪಳ | 2162 |
| 21 | ಮಂಡ್ಯ | 1753 |
| 22 | ಮೈಸೂರು | 3374 |
| 23 | ರಾಯಚೂರು | 3456 |
| 24 | ಶಿವಮೊಗ್ಗ | 2928 |
| 25 | ತುಮಕೂರು | 5938 |
| 26 | ಉಡುಪಿ | 3280 |
| 27 | ಉತ್ತರ ಕನ್ನಡ | 7148 |
| 28 | ಚಿಕ್ಕಬಳ್ಳಾಪುರ | 1287 |
| 29 | ರಾಮನಗರ | 906 |
| 30 | ಯಾದಗಿರಿ | 3667 |
|  | ಒಟ್ಟು | 92078 |